ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 08 ನೇ ಡಿಸೆಂಬರ್, 2020

ನಂಜನಗೂಡು ಬಜಾರ್ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಿರುವ ಹಳೆಯ ಮಾರುಕಟ್ಟೆಯ ಕಳಪೆ ಕಾಮಗಾರಿ ಬಗ್ಗೆ

ಶ್ರೀ ಎಸ್. ನಾಗರಾಜ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು):-

159 (192) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ನಂಜನಗೂಡು ಬಜಾರ್ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಿರುವ ತರಕಾರಿ, ದಿನಸಿ, ಮಾಂಸ ಹಾಗೂ ಮೀನು ಮಾರುಕಟ್ಟೆಯಲ್ಲಿ ನಿರ್ಮಿಸಿರುವ ಮಳಿಗೆಗಳ ಸಂಖ್ಯೆ ಎಷ್ಟು; ಮಾರುಕಟ್ಟೆ ಕಾಮಗಾರಿಯು ಅವೈಜ್ಞಾನಿಕವಾಗಿದ್ದು, ಕಳಪೆ ಗುಣಮಟ್ಟದಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ನೆಲ ಅಂತಸ್ತಿನಲ್ಲಿ ನೀರು ಹರಿದು ಹೋಗಲು ಅವಕಾಶ ಇಲ್ಲದೇ ನೀರು ನಿಲ್ಲುವುದು, ಗ್ರಾಹಕರ ಓಡಾಟಕ್ಕೆ ಸೂಕ್ತ ಸ್ಥಳಾವಕಾಶ ಬಿಡದಿರುವುದು, ಗೋಡೆಗಳು ಬಿರುಕು ಬಿಟ್ಟಿರುವುದು, ಕೇವಲ ಎರಡು ಪ್ರವೇಶ ದ್ವಾರಗಳ ನಿರ್ಮಾಣ ಮುಂತಾದ ಅವ್ಯವಸ್ಥೆಗಳು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ನೂತನವಾಗಿ ನಿರ್ಮಿತವಾಗಿರುವ ಈ ಮಾರುಕಟ್ಟೆಯನ್ನು ನವೀಕರಣಗೊಳಿಸಿ ವ್ಯಾಪಾರಸ್ಥರಿಗೆ ಹಂಚಿಕೆ ಮಾಡಲು ಕ್ರಮ ಕೈಗೊಳ್ಳಲಾಗುವುದೇ?